# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 874+549 |
| ಸದಸ್ಯರ ಹೆಸರು | ಶ್ರೀ ಆಯನೂರು ಮಂಜುನಾಥ್ (ಪದವೀಧರರ ಕ್ಷೇತ್ರ) ಹಾಗೂ ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | 21.02.2022 |
| ಉತ್ತರಿಸುವವರು | ಮಾನ್ಯ ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಅರಣ್ಯ ಇಲಾಖೆಯಲ್ಲಿ ನೇರ ನೇಮಕಾತಿ ಪ್ರಕ್ರಿಯೆಯಲ್ಲಿ ನಡೆದ ಭ್ರಷ್ಟಾಚಾರದ ಬಗ್ಗೆ ಭ್ರಷ್ಟಾಚಾರ ನಿಗ್ರಹ ದಳದಲ್ಲಿ ಪ್ರಕರಣ ದಾಖಲಾಗಿ ಆರೋಪಿತರ ನೌಕರರ ಮೇಲೆ ತನಿಖೆಗಾಗಿ ಪೂರ್ವಾನುಮತಿ ಕೋರಿ ಇಲಾಖೆಗೆ ಪತ್ರ ಬರೆದು ಆರು ತಿಂಗಳು ಕಳೆದರೂ ಇಲಾಖಾ ಮುಖ್ಯಸ್ಥರು ಪಿಸಿಎ ಆಕ್ಟ್ 17(ಎ) ರಂತೆ ಪೂರ್ವಾನುಮತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇಲಾಖಾ ಮುಖ್ಯಸ್ಥರು ಯಾವ ಕಾರಣಕ್ಕಾಗಿ ಪೂರ್ವಾನುಮತಿ ನೀಡಿರುವುದಿಲ್ಲ. | ಅರಣ್ಯ ಇಲಾಖೆಯಲ್ಲಿ ನೇರನೇಮಕಾತಿ ಮೂಲಕ ಭರ್ತಿ ಮಾಡಲು ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ:31.12.2019ರಂದು ಪ್ರಕಟಿಸಿ, ನೇಮಕಾತಿ ಪ್ರಕ್ರಿಯೆಯನ್ನು ಈಗಾಗಲೇ ಪೂರ್ಣಗೊಳಿಸಲಾಗಿರುತ್ತದೆ.<br><br>ಭ್ರಷ್ಟಾಚಾರ ನಿಗ್ರಹ ದಳದಿಂದ ಸ್ವೀಕೃತವಾದ ಪ್ರಸ್ತಾವನೆಗೆ ಸಂಬಂಧಿಸಿದಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ರವರನ್ನು ತನಿಖೆ ನಡೆಸಿ, ವರದಿ ನೀಡುವಂತೆ ಕೋರಿದ್ದರು. ಸದರಿಯವರು ತನಿಖೆ ನಡೆಸಿ, ಪ್ರಾಥಮಿಕ ತನಿಖಾ ವರದಿಯನ್ನು ದಿನಾಂಕ:16.11.2021ರಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರಿಗೆ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸಿ, ಕೆಲವು ಅಂಶಗಳ ಬಗ್ಗೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು ಸ್ಪಷ್ಟೀಕರಣ ಕೋರಿ ಸದರಿಯವರಿಗೆ ತನಿಖಾ ವರದಿಯನ್ನು ಹಿಂತಿರುಗಿಸಲಾಗಿತ್ತು. ಕೋರಲಾದ ಅಂಶಗಳ ಬಗ್ಗೆ ಸ್ಪಷ್ಟೀಕರಣದೊಂದಿಗೆ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ರವರು ಪರಿಷ್ಕೃತ ವರದಿಯನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರಿಗೆ ದಿನಾಂಕ:25.1.2022ರಂದು ಸಲ್ಲಿಸಿರುತ್ತಾರೆ. ಸದರಿ ವರದಿಯು ಪರಿಶೀಲನಾ ಹಂತದಲ್ಲಿದ್ದು, ಪರಿಶೀಲನೆಯ ನಂತರ ನಿಯಮಾನುಸಾರ ಕ್ರಮ ಜರುಗಿಸಲಾಗುವುದು. |
| ಆ. | ಭ್ರಷ್ಟಾಚಾರ ನಿಗ್ರಹ ದಳ ಗುರುತಿಸಿರುವ ಆಪಾದಿತ ನೌಕರರನ್ನು ಜಿಲ್ಲೆಯಿಂದ ವರ್ಗಾವಣೆ ಮಾಡಿ ಘಟನೋತ್ತರ ಅನುಮತಿ ಪಡೆಯಲು ಸೂಚಿಸಿ, ಸರ್ಕಾರವು ಮೂರು ಬಾರಿ ಪತ್ರ ಬರೆದ ಮೇಲೂ ಇಲಾಖಾ ಮುಖ್ಯಸ್ಥರು ಈ ಆರೋಪಿತ ನೌಕರರನ್ನು ವರ್ಗಾವಣೆ ಮಾಡದೇ ಜಿಲ್ಲೆಯ ಒಳಗೆ ನಿಯೋಜನೆ ಮಾಡಿಕೊಂಡು ತನ್ನ ಕಚೇರಿಯಲ್ಲಿ | ಆಪಾದಿತರೆನ್ನಲಾದ ನೌಕರರುಗಳನ್ನು ಅವರುಗಳ ಕಾರ್ಯನಿರ್ವಹಿಸುತ್ತಿದ್ದ ಹುದ್ದೆಗಳಿಂದ ವರ್ಗಾವಣೆ ಮಾಡಲಾಗಿದೆ. ಆಡಳಿತಾಧಿಕಾರಿಯ ಹುದ್ದೆಯು ಬೇರೆ ಜಿಲ್ಲೆಯ ಕಛೇರಿಗಳಲ್ಲಿ ಲಭ್ಯವಿಲ್ಲದಿರುವುದರಿಂದ ಹಾಗೂ ಅರಣ್ಯ ಭವನದ ಕಛೇರಿಗಳಲ್ಲಿ ಮಾತ್ರ ಸದರಿ ಹುದ್ದೆ ಲಭ್ಯವಿರುವುದರಿಂದ, ಸದರಿ ಆಡಳಿತಾಧಿಕಾರಿಯವರನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಭಿವೃದ್ಧಿ), ಬೆಂಗಳೂರು ಕಛೇರಿಗೆ ನಿಯೋಜಿಸಲಾಗಿರುತ್ತದೆ. |

| | | |
|---|---|---|
| | ಪತ್ರಾಂಕಿತ ಅಧಿಕಾರಿ ಮತ್ತು ನೌಕರರು ಇದ್ದರೂ ಸಹ ಅವರಿಗೆ ಇರುವ ಅಧಿಕಾರವನ್ನು ಪುನಃ ಆರೋಪಿತ ವ್ಯಕ್ತಿಗೆ ಹೆಚ್ಚುವರಿಯಾಗಿ ನೀಡಿರುವುದು ಹಾಗೂ ತಮ್ಮ ಕಚೇರಿಯ ವೇತನ ಸೆಳೆಯುವ ಮತ್ತು ಖಜಾನೆಯ ಎಲ್ಲಾ ಬಿಲ್ಲುಗಳಿಗೆ ರುಜು ಮಾಡುವ ಅಧಿಕಾರವನ್ನು ನೀಡಿ ಈ ವ್ಯಕ್ತಿಯ ಮೂಲಕವೇ ಕೆಲಸ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಛೇರಿಯ ಆಡಳಿತ ಸುಲಲಿತವಾಗಿ ನಡೆಯುವ ಹಿತದೃಷ್ಟಿಯಿಂದ ವೇತನ ಹಾಗೂ ಸಾದಿಲ್ವಾರು ಬಿಲ್ಲುಗಳಿಗೆ ಸಹಿ ಮಾಡುವ ಅಧಿಕಾರವನ್ನು ಮಾತ್ರ ಆಡಳಿತಾಧಿಕಾರಿ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಭಿವೃದ್ಧಿ), ಬೆಂಗಳೂರು ರವರಿಗೆ ನಿರ್ವಹಿಸಲು ಸೂಚಿಸಲಾಗಿರುತ್ತದೆ. ಸದರಿಯವರು ನೇಮಕಾತಿಗೆ ಸಂಬಂಧಿಸಿದ ಕಡತಗಳನ್ನು ನಿರ್ವಹಿಸುತ್ತಿಲ್ಲ. |
| ಇ. | ಬಂಧಿತರಲ್ಲಿ ಆಪಾದಿತ ನೌಕರರುಗಳು ಸಾಕ್ಷಿಗಳನ್ನು ನಾಶಮಾಡುವ ಸಾಧ್ಯತೆಗಳಿದ್ದು, ಇದರಿಂದ ತನಿಖೆಗೆ ಅಡ್ಡಿಯಾಗುವುದಿಲ್ಲವೆ; ಇದನ್ನು ತಡೆಯುವ ನಿಟ್ಟಿನಲ್ಲಿ ಸರ್ಕಾರದ ಕ್ರಮವೇನು; | ಈಗಾಗಲೇ ಪ್ರಾಥಮಿಕ ತನಿಖೆ ಮುಗಿದಿರುವ ಕಾರಣ ಹಾಗೂ ಈ ನೌಕರರುಗಳನ್ನು ಬೇರೆ ಕಛೇರಿಗಳಿಗೆ ನಿಯೋಜಿಸಲಾಗಿರುವುದರಿಂದ ಮತ್ತು ಸದರಿಯವರು ನೇಮಕಾತಿಗೆ ಸಂಬಂಧಿಸಿದಂತಹ ಯಾವುದೇ ಕಡತಗಳನ್ನು ನಿರ್ವಹಿಸುತ್ತಿಲ್ಲವಾದ್ದರಿಂದ, ಆಪಾದಿತ ನೌಕರರುಗಳು ಸಾಕ್ಷಿಗಳನ್ನು ನಾಶಮಾಡುವ, ಪ್ರಕರಣದ ತನಿಖೆಗೆ ಅಡ್ಡಿಯಾಗುವ ಪ್ರಶ್ನೆಯು ಉದ್ಭವಿಸುವುದಿಲ್ಲ. |
| ಈ. | ಅರಣ್ಯ ಇಲಾಖೆಯ ನೇಮಕಾತಿಯಲ್ಲಿ ನಡೆಯುತ್ತಿರುವ ಭ್ರಷ್ಟಾಚಾರವನ್ನು ಇಲಾಖೆಯ ಮುಖ್ಯಸ್ಥರು ಮುಂದುವರೆಸುವ ಉದ್ದೇಶದಿಂದ ಹಾಗೂ ಭ್ರಷ್ಟಾಚಾರದಲ್ಲಿ ಭಾಗಿಯಾಗಿರುವ ತನ್ನ ಅಧೀನ ಸಿಬ್ಬಂದಿಯನ್ನು ರಕ್ಷಣೆ ಮಾಡುವ ಸಲುವಾಗಿ ಜಾಗೃತ ದಳದಿಂದ ನೇಮಕಾತಿ ಅಕ್ರಮದ ಬಗ್ಗೆ ತನಿಖೆ ಪೂರ್ಣಗೊಂಡು ವರದಿಯನ್ನು ನೀಡಿದ್ದರೂ ಸಹ ಸರ್ಕಾರಕ್ಕೆ ಈ ವರದಿಯನ್ನು ಸಲ್ಲಿಸದಿರುವುದು ಹಾಗೂ ಭ್ರಷ್ಟಾಚಾರ ನಿಗ್ರಹ ದಳಕ್ಕೆ ಅನುಮತಿ ನೀಡದಿರುವ ವಿಷಯವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿ, ಇಲಾಖಾ ಮುಖ್ಯಸ್ಥರ ಮೇಲೆ ಯಾವ ಕಾಲಮಿತಿಯೊಳಗೆ ಕ್ರಮ ಜರುಗಿಸಲಾಗುವುದು; | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ರವರನ್ನು ತನಿಖೆ ನಡೆಸಿ, ವರದಿ ನೀಡುವಂತೆ ಕೋರಿದ್ದರು. ಸದರಿಯವರು ತನಿಖೆ ನಡೆಸಿ, ಪ್ರಾಥಮಿಕ ತನಿಖಾ ವರದಿಯನ್ನು ದಿನಾಂಕ:16.11.2021ರಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರಿಗೆ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸಿ, ಕೆಲವು ಅಂಶಗಳ ಬಗ್ಗೆ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು ಸ್ಪಷ್ಟೀಕರಣ ಕೋರಿ ಸದರಿಯವರಿಗೆ ತನಿಖಾ ವರದಿಯನ್ನು ಹಿಂತಿರುಗಿಸಲಾಗಿತ್ತು. ಕೋರಲಾದ ಅಂಶಗಳ ಬಗ್ಗೆ ಸ್ಪಷ್ಟೀಕರಣದೊಂದಿಗೆ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ರವರು ಪರಿಷ್ಕೃತ ವರದಿಯನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರಿಗೆ ದಿನಾಂಕ:25.1.2022ರಂದು ಸಲ್ಲಿಸಿರುತ್ತಾರೆ. ಸದರಿ ವರದಿಯು ಪರಿಶೀಲನಾ ಹಂತದಲ್ಲಿದ್ದು, ಪರಿಶೀಲನೆಯ ನಂತರ ನಿಯಮಾನುಸಾರ ಕ್ರಮ ಜರುಗಿಸಲಾಗುವುದು. ಆದ್ದರಿಂದ, ಈ ಪ್ರಕರಣದಲ್ಲಿ ಇಲಾಖಾ ಮುಖ್ಯಸ್ಥರು ಯಾವುದೇ ಸಿಬ್ಬಂದಿಯನ್ನು ರಕ್ಷಣೆ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಅಪಜೀ 07 ಅಜಾವಿ 2022

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು
ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು